# ಭಾರತದಲ್ಲಿ ಬಾಲ್ಯಾವಧಿಯ ಅಧ್ಯಯನ

**ಕೃಷ್ಣಕುಮಾರ್**

***

*ಕಳೆದ ಒಂದು ಶತಮಾನದಿಂದ ಭಾರತದಲ್ಲಿ ಪ್ರಬಲವಾಗಿರುವ ಬಾಲ್ಯಾವಧಿಯ ವಿವಿಧ ವಿಚಾರಗಳು ಹೊಸ ಶತಮಾನದಲ್ಲಿ ಪಾಲನೆ, ಶಿಕ್ಷಣ ಮತ್ತು ರಾಜಕೀಯದಲ್ಲಿ ಯಾವ ಅರ್ಥ ಕೊಡುತ್ತಿವೆ ಎಂಬುದರ ಬಗ್ಗೆ ಒಂದು ನೋಟ.*

*ಈ ಲೇಖನವು 26 ನವೆಂಬರ್ 2015ರಲ್ಲಿ , ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ಡ್ ಸ್ಟಡೀಸ್ ಶಿಮ್ಲಾದಲ್ಲಿ ನಡೆದ ಸ್ಪರ್ಧಾತ್ಮಕ ನೆಲೆಗಳು: ಬಾಲ್ಯಾವಧಿಯ ರಚನೆ ಎಂಬ ವಿಚಾರ ಸಂಕಿರಣದ ಪ್ರಧಾನ ಭಾಷಣವನ್ನು ಆಧರಿಸಿದೆ.*

***

ಬಾಲ್ಯಾವಧಿ ಎಂಬ ವಿಶ್ಲೇಷಣಾತ್ಮಕ ಪದವನ್ನು ಬಳಸುವ ನಮ್ಮ ಸಾಮರ್ಥ್ಯವು ಪಾಲನೆ, ಬೋಧನೆ, ಮಕ್ಕಳ ಸಾಹಿತ್ಯ ಮತ್ತು ಮಕ್ಕಳ ಭೂತ ಮತ್ತು ವರ್ತಮಾನದ ನಮ್ಮ ಜ್ಞಾನವನ್ನು ಅವಲಂಬಿಸಿದೆ. ಇವು ವಿದ್ವತ್ ಪೂರ್ಣ ಪ್ರಯತ್ನದ ವಿಶಿಷ್ಟ ಕ್ಷೇತ್ರಗಳು , ಇವುಗಳಲ್ಲಿ ಯಾವುದೂ ನಮ್ಮ ಶೈಕ್ಷಣಿಕ ಕ್ಷೇತ್ರಗಳಲ್ಲಿ ಸರಿಯಾಗಿ ಅಭಿವೃದ್ಧಿ ಹೊಂದಿಲ್ಲ. ಆದ್ದರಿಂದ ನಾವು ಬಾಲ್ಯಾವಧಿಯ ಬಗ್ಗೆ ಚರ್ಚಿಸುವಾಗ ನಮಗೆ ಲಭ್ಯವಿರುವ ಜ್ಞಾನದಿಂದ ನಮ್ಮ ಗುರಿಗಳ ಬಗ್ಗೆ ಇರುವ ಮಿತಿಯನ್ನು ಗುರುತಿಸಬೇಕು. ನಮ್ಮ ದೇಶದಲ್ಲಿ ಬಾಲ್ಯಾವಧಿಯು ತೆರೆದುಕೊಳ್ಳುವ ವೈವಿಧ್ಯ ಸಂದರ್ಭಗಳೇ ಒಂದು ಪ್ರಮುಖವಾದ ಮಿತಿಗೊಳಿಸುವ ಆಯಾಮವಾಗಿವೆ.

ವೈವಿಧ್ಯತೆ ಎಂಬುದು ಸುಲಭವಾಗಿ ಮೋಸಮಾಡುವ ಪದ. ಆರ್ಥಿಕ ಪರಿಸ್ಥಿತಿ ಹಾಗೂ ಜಾತಿ ಶ್ರೇಣಿಗಳಿಂದ ಉದ್ಭವಿಸುವ ಅಸಮಾನತೆಯ ವ್ಯತ್ಯಾಸಗಳನ್ನು ನಮ್ಮ ದೃಷ್ಟಿಯಿಂದ ದೂರ ಇಟ್ಟು, ಭೌಗೋಳಿಕ ಮತ್ತು ಸಾಂಸ್ಕೃತಿಕವಾಗಿ ಉದಯಿಸುವ ಆರ್ಥಿಕ ವ್ಯತ್ಯಾಸಗಳ ಮುಖ್ಯಾಂಶಗಳನ್ನು ಅದು ವಿಶದಪಡಿಸುತ್ತದೆ. ಬಾಲ್ಯಕ್ಕೆ ಅನ್ವಯಿಸಿದಾಗ ವೈವಿಧ್ಯತೆ ಸಂಸ್ಕೃತಿಯಿಂದ ಪ್ರೇರಿತವಾದ ಲಿಂಗತ್ವದ ಭಿನ್ನತೆಗಳನ್ನು ಮರೆಮಾಡುತ್ತದೆ. ಬಡತನ ಹಾಗೂ ಸ್ತ್ರೀ ಲಿಂಗತ್ವಕ್ಕೆ ಸಂಬಂಧಿಸಿದಂತೆ ಭಾರತದಲ್ಲಿ ಬಾಲ್ಯಾವಧಿಯಲ್ಲಿ ಅಷ್ಟೇನೂ ವೈವಿದ್ಯತೆ ಇಲ್ಲ ಎಂಬುದು ಅಸತ್ಯವೇನಲ್ಲ. ನಾವು ಬಾಲ್ಯಾವಧಿಯ ಅಧ್ಯಯನದಲ್ಲಿ ಗ್ರಾಮೀಣ ಹಾಗೂ ನಗರ ಪ್ರದೇಶವನ್ನೂ ಒಂದು ಸಂಬಂದಪಟ್ಟ ವರ್ಗವೆಂದು ಗುರುತಿಸಬೇಕು. ಭಾರತದಲ್ಲಿ ಹೆಚ್ಚುತ್ತಿರುವ ಅಸಮರ್ಪಕ ಆರ್ಥಿಕ ಅಭಿವೃದ್ಧಿಯ ಆಧುನಿಕತೆಯೊಂದಿಗೆ ಇದರ ಪ್ರಸ್ತುತತೆಯೂ ಹೆಚ್ಚುತ್ತಿದೆ.

ವಿಶ್ವಸಂಸ್ಥೆ ಯುದ್ಧ ಹಾಗೂ ಸ್ಥಳೀಯ ಹಿಂಸೆಯಂತಹ ಕಷ್ಟಕರ ಸಂದರ್ಭದಲ್ಲಿನ ಬಾಲ್ಯಾವಧಿಯನ್ನು ಗುರುತಿಸಿರುವಂತೆ ನಿಜವಾಗಿ ನಾವು ಬಲವಂತವಾಗಿ ಸ್ಥಳಾಂತರ ಹೊಂದಿದ ಬಾಲ್ಯಾವಧಿಯಂತಹ ಹೊಸ ವರ್ಗವನ್ನು ಗುರುತಿಸಬೇಕಾಗಬಹುದು.

## ಯುರೋಪಿನ ಮಗು

ಭಾರತದಲ್ಲಿ ಬಾಲ್ಯಾವಧಿಯ ಬಗೆಗಿನ ನಮ್ಮ ಚಿಂತನೆಯು ಪ್ರಾಯಶಃ ಈ ವಿಷಯದ ಬಗ್ಗೆ ಜಾಗತಿಕಮಟ್ಟದ ಬಲವಾದ ಸಂಕಥನದ ಚೌಕಟ್ಟಿನಲ್ಲಿರಬಹುದು. ಅದರ ಪ್ರಮಾಣಕ ಗುಣಗಳು ಅದರದ್ದೇ ಆದ ಉಪಯೋಗಗಳನ್ನು ಹೊಂದಿರಬಹುದು. ಆದರೆ ಅದು ನಾವು ಬಾಲ್ಯಾವಧಿಯನ್ನು ಅಧ್ಯಯನ ಮಾಡುವ ನಮ್ಮ ಪ್ರಯತ್ನಗಳ ಸುತ್ತ ಅನಿವಾರ್ಯವಾದ ಹಾಗೂ ನಿರ್ಬಂಧಪಡಿಸುವ ತುಲನಾತ್ಮಕ ಹೊರನೋಟವನ್ನು ಜಾರಿಗೊಳಿಸುತ್ತದೆ. ವಸಹಾತುಶಾಹಿ ಶಿಕ್ಷಣ ವ್ಯವಸ್ಥೆಯಲ್ಲಿ ನಮ್ಮ ಕುತೂಹಲವು ಪಡೆದ ತರಬೇತಿಗೆ ಈ ಸಮಸ್ಯೆಯು ಹೊಂದಿಕೊಂಡಿದೆ. ನಾವು ಒಂದೋ ಯುರೋಪಿನ ಅನುಭವಗಳ ಪುನರಾವರ್ತನೆಗೆ ಅಥವಾ ಪ್ರಕ್ರಿಯಾತ್ಮಕ ವಿಭಿನ್ನತೆಗೆ ಹಂಬಲಿಸುತ್ತೇವೆ. ವಸಹಾತುಶಾಹಿತ್ವ ಎಂಬುದು ಆಧುನಿಕ ಪ್ರಪಂಚದ ಪ್ರಮುಖವಾದ ಆದರ್ಶ ಅದು ಶೈಕ್ಷಣಿಕ ವಿಕಾಸವನ್ನು ಕೆಲವೇ ಆಯ್ಕೆಗಳಿಗೆ ಸೀಮಿತಗೊಳಿಸುತ್ತದೆ. ಅದಕ್ಕಿಂತ ಹೆಚ್ಚಾಗಿ ನಮ್ಮ ಸಂಕಥನವು ನಮ್ಮ ಉದ್ದೇಶಿತ ವೀಕ್ಷಕರ ಸ್ಥಳದಿಂದ ನಿರ್ಧರಿಸಲ್ಪಡುತ್ತದೆ. ಜ್ಞಾನದ ಯಾವುದೇ ಹೊಸ ಕ್ಷೇತ್ರ ಯೋಜನೆಗಳು ಈ ನಿರ್ಭಂದನೆಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು ಅದರಲ್ಲೂ ಬಾಲ್ಯಾವಧಿಯ ಅಧ್ಯಯನಗಳಂತಹ ಸಂಶೋಧನಾ ವಂಚಿತ ಕ್ಷೇತ್ರಗಳಿಗೆ ಇದು ಹೆಚ್ಚಾಗಿ ಅನ್ವಯಿಸುತ್ತದೆ.

ಮಗು ಎಂಬ ಸ್ವತಂತ್ರ, ವೈಯಕ್ತಿಕ ಮತ್ತು ಸಮಾನತೆಯ ಪರಿಕಲ್ಪನೆ ಪಶ್ಚಿಮ ಯುರೋಪಿನಲ್ಲಿ 18ನೇ ಶತಮಾನದ ಮಧ್ಯಭಾಗದಲ್ಲಿ ಉದಯಿಸಿತು. ಈ ಪದ ಸಮೂಹವು ಆಧುನಿಕ ಶಿಕ್ಷಣ ಶಾಸ್ತ್ರದ ಪ್ರಮುಖ ಭಾಗವಾಗಿದ್ದು ವಯಸ್ಕಾವಧಿಯಿಂದ ಬಾಲ್ಯಾವಧಿಯನ್ನು ನಿಖರವಾಗಿ ಬೇರ್ಪಡಿಸುವ ನಿಟ್ಟಿನಲ್ಲಿದೆ. 150 ವರ್ಷಗಳ ಹಿಂದೆಯೇ ಅನೇಕರಂತೆ ಮಾಂಟೆಸೊರಿ ಹಾಗೂ ಜೀನ್ ಪಿಯಾಜೆಯವರು ಬಾಲ್ಯಾವಧಿಯ ಸ್ವರೂಪವನ್ನು ಚಿತ್ರಿಸಿದ್ದರು. ಇವರಿಬ್ಬರೂ ಜೀವಶಾಸ್ತ್ರದ ಪ್ರಕಾರ ಎಳೆಯ ಮನಸ್ಸು ಬೆಳೆಯುವ ರೀತಿಯನ್ನು ಗ್ರಹಿಸಿದ್ದರು.

ಆದರೆ ಈಗಾಗಲೇ ಪರಿಸರಕ್ಕೆ ಸಂಬಂಧಿಸಿದಂತೆ ಜೀವನದ ಬಗೆಗಿನ ಅಧ್ಯಯನದಲ್ಲಿ ಒಂದು ಮಹತ್ತರವಾದ ಬದಲಾವಣೆ ಆಗಿದೆ. ಬಾಲ್ಯಾವಧಿಯ ವರ್ತನೆಯ ಅಧ್ಯಯನಗಳು ಸರಳ ಹಾಗೂ ವಿಮರ್ಶೆಗೆ ಅರ್ಹವಾಗಿವೆ ಎಂದು ಇಂದಿನ ದಿನಗಳಲ್ಲಿ ಅನ್ನಿಸುತ್ತಿದೆಯಾದರೂ ವಂಶವಾಹಿನಿಯಾಗಿ ಬಂದ

ಸಾಮರ್ಥ್ಯಕ್ಕಿಂತ ಪರಿಸರದ ಪಾತ್ರ ಪ್ರಮುಖ ಎಂಬುದನ್ನು ಸಾಬೀತುಪಡಿಸಿದೆ. ಇದಕ್ಕೆ ಸಮಾನಾಂತರವಾಗಿ ಫ್ರಾಯ್ಡ್ ರವರ ಮನೋವಿಶ್ಲೇಷಣೆಯು ಪೂರ್ವಬಾಲ್ಯಾವಧಿಯ ಅನುಭವದ ರಚನಾತ್ಮಕ ಸ್ವರೂಪವನ್ನು ವಿವರಿಸಿದೆ. ಫ್ರಾಯ್ಡ್ ರವರ ಒಂದು ರೀತಿಯ ನಿರ್ಣಾಯಕ ವಿವರಣೆಯು ಸಾಮಾಜಿಕ ಹಾಗೂ ರಾಜಕೀಯ ಪ್ರಕ್ರಿಯೆಯನ್ನು ಮಕ್ಕಳ ವಿದ್ಯಾಭ್ಯಾಸ ಮತ್ತು ಆರೋಗ್ಯವನ್ನು ಪ್ರಮುಖ ಆದ್ಯತೆಯನ್ನಾಗಿಸುವುದರತ್ತ ಕೊಂಡೊಯ್ದಿದೆ.

ಪೂರ್ವಬಾಲ್ಯಾವಧಿಯ ಪಾಲನಾ ಅಭ್ಯಾಸಗಳಿಗೆ ಕಾರಣವಾಗಿರುವ ಫ್ರಾಯ್ಡ್ ರವರ ಸಿದ್ಧಾಂತದ ನಿರ್ಣಾಯಕ ಅಂಶಗಳನ್ನು ಅನೇಕ ಶೈಕ್ಷಣಿಕ ಕ್ಷೇತ್ರಗಳ ಉನ್ನತ ಅಧ್ಯಯನವು ಪ್ರಶ್ನಿಸಿದೆ. 20ನೆಯ ಶತಮಾನದ ಪೂರ್ವ ಭಾಗದಲ್ಲಿ ಕಲಿಕೆಯ ಬಗ್ಗೆ ವಿವಿಧ ಸಿದ್ಧಾಂತಗಳ ಪಾಶ್ಚಿಮಾತ್ಯ ಚರ್ಚೆಗಳು ರಾಜಕೀಯವಾಗಿ ಸಕ್ರಿಯವಾಗಿದ್ದ ಉತ್ಸಾಹಗಳು ವಿವಿಧ ಬಗೆಯ ಪ್ರಜಾಪ್ರಭುತ್ವದ ಹೋರಾಟಗಳಿಂದ ನಿರ್ಮಿತಗೊಂಡಿವೆ.

ತನ್ನ ಸ್ವಂತ ರಾಜಕೀಯ ಬೆಳವಣಿಗೆಯಲ್ಲಿ ಯುರೋಪ್ ನಿಷ್ಠಾವಂತ ಪೌರ ಎನ್ನುವುದರ ಬಗೆಗಿನ ರೂಸೋರವರ ಪ್ರಶ್ನೆಗೆ ಅನೇಕ ಉತ್ತರಗಳನ್ನು ಕಂಡುಕೊಂಡಿದೆ. ರೂಸೋರವರ ಕಾರ್ಯಕ್ಷೇತ್ರವು ಯಾವ ಮಗುವಿಗೆ ಪ್ರಕೃತಿಯು ಸ್ವತಂತ್ರವನ್ನು ಕೊಟ್ಟಿದೆಯೋ ಅದರ ಮೇಲೆ ಕೇಂದ್ರೀಕೃತವಾಗಿತ್ತು. ಆ ರೀತಿಯ ಮಗುವು ಹೇಗೆ ಅಕ್ಷರಸ್ಥನಾಗುತ್ತದೆ? ಈ ಒಂದು ಪ್ರಮುಖ ಪ್ರಶ್ನೆಯು ಶಿಶು ಕೇಂದ್ರೀತ ಶಿಕ್ಷಣ ಶಾಸ್ತ್ರ ಮತ್ತು ಪೌರತ್ವಕ್ಕಾಗಿ ಶಿಕ್ಷಣ ಇವುಗಳ ನಡುವಿನ ಶೈಕ್ಷಣಿಕ ಅಭಿವೃದ್ಧಿ ಮತ್ತು ವಿರೋಧಾಭಾಸಗಳನ್ನು ಪ್ರತಿನಿಧಿಸುತ್ತದೆ.

**ನಮ್ಮ ವಸಹಾತುಶಾಹಿ ಸಂದರ್ಭ**

ಈ ರೀತಿಯ ವಿಷಯಗಳನ್ನು ಗುರುತಿಸಲು ಮತ್ತು ಪ್ರಶಂಸಿಸಲು ಅಥವಾ ಅವುಗಳ ಉಪಯೋಗಗಳನ್ನು ನಮ್ಮ ವಸಹಾತುಶಾಹಿ ಸಂದರ್ಭಗಳಿಗೆ ಅಳವಡಿಸುವಲ್ಲಿ ಹೆಚ್ಚು ಬಾರಿ ವಿಫಲರಾಗುತ್ತೇವೆ. ನಮಗೇನೂ ಇದಕ್ಕೆ ಮಾರ್ಗದರ್ಶನವಿಲ್ಲ ಎಂದೇನೂ ಇಲ್ಲ. ಈ ವಿಚಾರಗಳ ಬಗ್ಗೆ ಗಾಂಧೀ, ಟಾಗೋರ್‌ರಂತಹ ಪ್ರತಿಷ್ಠಿತ ಗುರುಗಳಿದ್ದರು. ಅವರ ಪರಂಪರೆಯನ್ನು ಮುಂದುವರಿಸುತ್ತ ದೇವಿಪ್ರಸಾದರು ಮಗುವೆಂದರೆ ಅದರ ಜೀವವನ್ನು ದೇಹದಿಂದ ಹಿಂಡಿದಾಗ ತನ್ನನ್ನು ವ್ಯಕ್ತಪಡಿಸಲು ಬಯಸುತ್ತಿರುವ ಯಾತನೆಯಲ್ಲಿರುವ ಒಂದು ಸಂಸ್ಕೃತಿ ಎಂದು ಅರ್ಥೈಸಿಕೊಂಡರು. ಭಾರತದ ವಸಹಾತುಶಾಹಿ ಪೌರರಾದ ನಾವು ಈ ಗುರುಗಳನ್ನು ಗಮನವಿಟ್ಟು ಕೇಳಿಸಿಕೊಳ್ಳಲು ಆಗದಷ್ಟು ದೇಶದ ಅಭಿವೃದ್ಧಿಯ ಬಗ್ಗೆ ನಿರತರಾಗಿದ್ದೇವೆ. ನಾವು ನಮ್ಮ ರಾಜಕೀಯ ಇತಿಹಾಸವನ್ನು ಹೆಚ್ಚಾಗಿ ಕಲ್ಪಿಸಿಕೊಂಡು ಅಧ್ಯಯನ ಮಾಡಬೇಕು. ಇದನ್ನು ಮಾಡಲು ನಾವು ಒಪ್ಪಿಕೊಂಡರೆ ಮಗುವು ಸ್ವತಂತ್ರ ದೇಶದ ಪ್ರಮುಖ ಅಂಶವಾಗುವ ಪರಿವರ್ತಕ ಕ್ಷಣವನ್ನು ನೋಡುತ್ತೇವೆ.

ಈ ಸಾಂಕೇತಿಕ ಘಟನೆ 1930ರಲ್ಲಿ ಗಾಂಧಿಯವರು ಸಾಮಾನ್ಯ ಉಪ್ಪನ್ನು ಸಾಮೂಹಿಕ ಉತ್ಸಾಹವಾಗಿ ಪರಿವರ್ತಿಸುವ ಮೂಲಕ ತನ್ನನ್ನು ತಾನು ಮಾಂತ್ರಿಕ ನಾಯಕನೆಂದು ಸ್ಥಾಪಿಸಿಕೊಂಡಾಗ ಆಯಿತು. ಪ್ರೇಮಚಂದರ ಈದ್ಗಾ ಎನ್ನುವ ಸಣ್ಣಕತೆ ಈ ಒಂದು ಕ್ಷಣವನ್ನು ಹಿಡಿದಿಟ್ಟುಕೊಳ್ಳುತ್ತದೆ. ಇದರ ನಾಯಕ ಒಬ್ಬ ಬಡ ಮುಸ್ಲಿಂ ಹುಡುಗ, ಆತ ತನ್ನ ಶ್ರೀಮಂತ ನೆರೆಹೊರೆಯ ಮಕ್ಕಳು ಹಳ್ಳಿಯ ಜಾತ್ರೆಯಲ್ಲಿ ಕೊಂಡುಕೊಳ್ಳುವ ಮಣ್ಣಿನ ಆಟಿಕೆಗಳು ಮನೆಗೆ ಬರುವಷ್ಟರಲ್ಲಿ ಮುರಿದುಹೋಗುತ್ತವೆ ಆದ್ದರಿಂದ ತಾನು ಆಯ್ದುಕೊಂಡ ಜೋಡಿ ಇಕ್ಕಳವೇ ಸರಿ ಎನ್ನುತ್ತಾನೆ. ಹಮೀದನು ತಾನು ಕೊಂಡುಕೊಂಡ ಆಟಿಕೆಯ ವಿವಿಧ ಪಾತ್ರಗಳನ್ನು ಕಲ್ಪಿಸಿಕೊಂಡು ಅದು ಉತ್ಕೃಷ್ಟವಾದುದೆಂದು ಹೆಮ್ಮೆಯಿಂದ ಬೀಗುತ್ತಾನೆ. ಆದರೆ ಅದನ್ನು ತನ್ನ ಅಜ್ಜಿಗಾಗಿ ತಂದಿದ್ದೇನೆಂದು ಆತನು ಹೇಳಿದಾಗ ಆಕೆಯ ಮನ ಕಲಕಿತು. ಹಮೀದನ ಸಂಪದ್ಭರಿತ ಹಾಗೂ ಐಹಿಕ ಕಲ್ಪನೆ ಹಾಗೂ ಅವನ ಶಾಬ್ದಿಕ ಹಾಗೂ ನೈತಿಕ ಹೋರಾಟದ ಕೊಡುಗೆಗಳು ಅಸಾಮಾನ್ಯ ಸಂಕೇತಗಳಾದ ಖಾದಿ ಮತ್ತು ಉಪ್ಪಿನೊಂದಿಗೆ ಬೆಸೆದ ಗಾಂಧಿಯ ನಿಲುವನ್ನು ಕಲಕಿದ ಭಾರತದ ಕಲ್ಪನೆಯನ್ನು ಪ್ರತಿಧ್ವನಿಸುತ್ತವೆ. ಆತ್ಮವನ್ನು ಕಳೆದುಕೊಂಡ ಪೌರತ್ವವನ್ನು ಹೊಸದಾಗಿ ಶೋಧಿಸುವುದನ್ನು ಗುರಿಯಾಗಿಟ್ಟುಕೊಂಡ ಸಂರಕ್ಷಿಸಿದ ಪುರಾತತ್ವವನ್ನು ಅದು ಸೂಚಿಸುತ್ತದೆ.

1930 ರ ಸಮಯದಲ್ಲಿ ಹಿಂದಿ ಹಾಗೂ ಇತರೆ ಭಾಷೆಗಳಲ್ಲಿ ಮಕ್ಕಳ ಸಾಹಿತ್ಯವು ದೀರ್ಘ ವಸಂತಕ್ಕೆ ಕಾಲಿಟ್ಟಿರುವುದು ಕಾಕತಾಳೀಯವೇನಲ್ಲ. ಈ ಎರಡು ದಶಕಗಳಲ್ಲಿ ಪ್ರಕಟಗೊಂಡ ಸಣ್ಣ ಮಕ್ಕಳ ಸಾಹಿತ್ಯದ ಪ್ರಮಾಣ ಮತ್ತು ಗುಣಮಟ್ಟ ಬಾಲ್ಯಾವಧಿಯಲ್ಲಿ ಸೃಜನಾತ್ಮಕವಾಗಿ ತೊಡಗಿಸಿಕೊಳ್ಳುವುದರ ಬಗ್ಗೆ ಗಮನಾರ್ಹವಾದ ಪ್ರಕ್ರಿಯೆಯನ್ನು ಸೂಚಿಸುತ್ತದೆ. ಈ ಹುಡುಕಾಟದಲ್ಲಿ ವಿವಿಧ ರೀತಿಯ ಅಂಶಗಳಿವೆ. ಮಕ್ಕಳ ಪಾಲನೆ ಮತ್ತು ಶಿಕ್ಷಣದ ಬಗ್ಗೆ ಪ್ರಯೋಗ ಮತ್ತು ಚರ್ಚೆ ಸ್ಪಷ್ಟವಾಗಿಲ್ಲ.

ಗಾಂಧಿಯವರ ಶಾಲಾ ಶಿಕ್ಷಣದ ವಿಮರ್ಶೆ ಮತ್ತು ಶಿಕ್ಷಣ ಆಧುನಿಕತೆಯ ಆಮೂಲಾಗ್ರ ಆವೃತ್ತಿಯ ಪ್ರಸ್ತಾಪವನ್ನು ಈ ಸಮಗ್ರ ಸನ್ನಿವೇಶದಲ್ಲಿ ನೋಡಬೇಕು. ಟಾಗೋರ್ ಮತ್ತು ಗಾಂಧಿ ತಮ್ಮ ವಿಶಿಷ್ಟವಾದ ದೃಷ್ಟಿಕೋನ ಮತ್ತು ಕಾಳಜಿಗಳೊಂದಿಗೆ ಬಾಲ್ಯವನ್ನು ರೂಪಿಸಲು ದಿಟ್ಟ ಪ್ರಯತ್ನಗಳನ್ನು ಮಾಡಿದರು. ಮರ್ಜೋರಿ ಸೈಕ್ಸ್ ಇವರಿಬ್ಬರ ಆಲೋಚನೆಗಳ ನಡುವೆ ತನ್ನ ವೈಯಕ್ತಿಕ, ವಿಶ್ಲೇಷಣಾತ್ಮಕ ಪ್ರಯತ್ನದಿಂದ ಸೇತುವೆ ನಿರ್ಮಿಸಿದ್ದು ಬಾಲ್ಯಾವಧಿಯ ಇತಿಹಾಸದಲ್ಲಿ ಆಸಕ್ತಿ ಹೊಂದಿರುವ ಯಾರಿಗಾದರೂ ವಿಶಿಷ್ಟ ಮಹತ್ವದ್ದಾಗಿದೆ.

**ರಕ್ಷಣೆಯ ಚಿಂತನೆ**

ಯುರೋಪಿನ ಇತಿಹಾಸ ಮತ್ತು ಚಿಂತನೆಯು ವಿಸ್ತೃತ ಮತ್ತು ಸಂರಕ್ಷಿತ ಬಾಲ್ಯದ ಕಲ್ಪನೆಗೆ ಕಾರಣವಾಯಿತು. ರಕ್ಷಣೆಯ ಈ ಕಲ್ಪನೆಯ ಎರಡು ಮುಖಗಳನ್ನು ನಾವು ಪ್ರತ್ಯೇಕಿಸಬಹುದು. ಒಂದು, ಕೆಲಸಕ್ಕೆ ತೆರಳದಂತೆ ಮಕ್ಕಳ ದೈಹಿಕ ರಕ್ಷಣೆ; ಇನ್ನೊಂದು, ಲೈಂಗಿಕತೆಯ ಒಳ್ಳೆಯ ಮತ್ತು ಕೆಟ್ಟ ಮುಖಗಳನ್ನು ತಿಳಿದುಕೊಳ್ಳುವುದರಿಂದ, ಲೈಂಗಿಕತೆಯ ಸಾಮಾಜಿಕ ಅಭ್ಯಾಸದಿಂದ ಮಕ್ಕಳನ್ನು ರಕ್ಷಿಸುವುದು. ಮೊದಲನೆಯದು ಮಕ್ಕಳನ್ನು ಕಡ್ಡಾಯವಾಗಿ ನೋಡಿಕೊಳ್ಳುವ ಹಕ್ಕನ್ನು ಕೇವಲ ಕುಟುಂಬದಿಂದ ಮಾತ್ರವಲ್ಲದೆ ರಾಜ್ಯವು ನಿರ್ವಹಿಸುವ ಸಾಂಸ್ಥಿಕ ವ್ಯವಸ್ಥೆಯು ನೋಡಿಕೊಳ್ಳಬೇಕು. ಇನ್ನೊಂದು ಬಾಲ್ಯದ ಕಲ್ಪನೆಯನ್ನು ಲೈಂಗಿಕ ಮುಗ್ಧತೆಯ ಅವಧಿಯೆಂದು ಭಾವಿಸಿ, ಸುಪ್ತತೆಯ ಮಾನಸಿಕ ಹಂತವನ್ನು ವಿಸ್ತರಿಸುವುದು. ಯುರೋಪಿನ ಮಕ್ಕಳ ಸಾಹಿತ್ಯದ ಅನೇಕ ಶ್ರೇಷ್ಠ ಕೃತಿಗಳು ಈ ಚಿಂತನೆಯಲ್ಲಿ ಅದ್ದಿವೆ ಮತ್ತು ಪೂರ್ವ ಸುಪ್ತತೆಯನ್ನು ಅನುಭವಿಸುವ ಮಕ್ಕಳ ಮುಗ್ಧ ಸಾಹಸಗಳನ್ನು ಚಿತ್ರಿಸುತ್ತವೆ. ನಮ್ಮಂತಹ ವಸಾಹತುಶಾಹಿ ರಾಷ್ಟ್ರಕ್ಕೆ, ಮೊದಲ ಅಂಶವು ಕಠಿಣ ಸಂದಿಗ್ಧತೆ ಎಂದು ಸಾಬೀತಾಯಿತು. ಕುಟುಂಬದ ಔದ್ಯೋಗಿಕ ಜೀವನದಲ್ಲಿ ಮಗುವಿನ ಭಾಗವಹಿಸುವಿಕೆಯು ಕೃಷಿ ಮತ್ತು ಕರಕುಶಲ ಆರ್ಥಿಕತೆಗೆ ಗ್ರಾಮೀಣ ಜೀವನದ ಒಂದು ಸತ್ಯವಾಗಿದೆ. ಆದಾಯದ ಉತ್ಪಾದನೆಯಲ್ಲಿ ಮಗುವಿನ ಪಾಲ್ಗೊಳ್ಳುವಿಕೆಯನ್ನು ನಿಷೇಧಿಸುವ ಆಧುನಿಕ ಕಲ್ಪನೆಯೊಂದಿಗೆ ಇದನ್ನು ಸುಲಭವಾಗಿ ಮರುಹೊಂದಿಸಲು ಸಾಧ್ಯವಿಲ್ಲ. ಆಧುನಿಕ ಮಗುವನ್ನು ಎಲ್ಲಾ ರೀತಿಯ ಬಾಲಕಾರ್ಮಿಕ ಪದ್ಧತಿಗಳನ್ನು ನಿಷೇಧಿಸುವ ಹಂಬಲದಿಂದ ಪ್ರತಿ ಮಗುವನ್ನು ಪೌರತ್ವಕ್ಕೆ ಸೇರಿಸಿಕೊಳ್ಳಬಹುದು. ಆದರೆ ಬಾಲಕಾರ್ಮಿಕತೆ ಮುಂದುವರೆದಿದೆ ಮತ್ತು ನಗರಗಳಲ್ಲಿ ವೇಶ್ಯಾವಾಟಿಕೆ ಮತ್ತು ಕೌಟಂಬಿಕ ದಾಸ್ಯದಂತಹ ಹೊಸ ರೂಪಗಳನ್ನು ಹೊಂದುತ್ತಿದೆ. ಮತ್ತೊಂದೆಡೆ ಕಡ್ಡಾಯ ಶಿಕ್ಷಣ ಅಸ್ತಿತ್ವ ಮತ್ತು ಅರ್ಥವನ್ನು ಪಡೆಯಲು ಹೆಣಗಾಡುತ್ತಿದೆ. ಮಗುವಿನ ವಿಷಯ ಬಿಡಿ, ಮಗುವಿನ ಶಿಕ್ಷಕರಿಗೆ ಗೌರವವನ್ನು ನೀಡಲೂ ರಾಜ್ಯವು ವಿಫಲವಾಗಿದೆ.

ಇತರ ಆಧುನಿಕ ನಿಯತಾಂಕವು ಮುಗ್ಧತೆಯ ಕಲ್ಪನೆಯನ್ನು ತೋರಿಸುತ್ತದೆ. ಇದರ ಅರ್ಥವೇನೆಂದರೆ. ಮಗುವಿನ ಸುಪ್ತ ಕಾಮಾವಧಿಯಲ್ಲಿ(ಲೇಟೆನ್ಸಿ) ಲೈಂಗಿಕತೆಯಿಂದ ಮತ್ತು ಹದಿಹರೆಯದ ಸಮಯದಲ್ಲಿ ಲೈಂಗಿಕತೆಯ ಪ್ರಾಮುಖ್ಯತೆಯಿಂದ ಮಗುವು ಹೊರತಾಗಿರುವುದನ್ನು ತಿಳಿಸುತ್ತದೆ. ಯುರೋಪಿನ ಆಧುನಿಕತೆ ಎಂದರೆ ಲೈಂಗಿಕ ಕಲ್ಪನೆಯಿಂದ ಮುಕ್ತರಾಗಲು, ತಮ್ಮದೇ ಆದ ಬೆಳವಣಿಗೆಯ ಗತಿಯಲ್ಲಿ ಮತ್ತು ತಿಳಿವಳಿಕೆಯೊಂದಿಗೆ ಲೈಂಗಿಕ ಜೀವಿಗಳಾಗಿ ಬೆಳೆಯುವ ಸ್ವಾತಂತ್ರ್ಯವನ್ನು ಹೊಂದುವ ಅವಕಾಶ ಮಾಡಿಕೊಡುವುದು. ಯುರೋಪಿಯನ ಬಾಲ್ಯದ ಬಗೆಗಿನ ಆದರ್ಶದ ಈ ಎರಡನೆಯ ಅಂಶವು ಸುಪ್ತತೆಯ ಅವಧಿಯು ಬೌದ್ಧಿಕ

ಬೆಳವಣಿಗೆಯ ಮಹತ್ವದ ಅವಧಿಯೆಂದು ಗುರುತಿಸಲು ಕಾರಣವಾಗಿದೆ. ಬಾಲ್ಯದಲ್ಲಿ ಲೈಂಗಿಕ ಶೋಷಣೆಯಿಂದ ಪಾರಾಗುವ ಸ್ವಾತಂತ್ರ್ಯವು ಕೆಲಸದಿಂದ ಪಾರಾಗುವ ಸ್ವಾತಂತ್ರ್ಯಕ್ಕಿಂತ ಹೆಚ್ಚು ಎನ್ನಿಸಿದೆ. ಯುರೋಪಿನ ಚಿಂತನೆ ಮತ್ತು ಅನುಭವದಲ್ಲಿ ಬೇರೂರಿರುವ ಬಾಲ್ಯದ ಜಾಗತಿಕ ಸಂಕಥನದಲ್ಲಿ, ನಾವು ವ್ಯವಹರಿಸುತ್ತಿರುವ ವಿಷಯವು ಕೇವಲ ಅನೇಕ ಆಯಾಮಗಳನ್ನು ಹೊಂದಿಲ್ಲ ಅನೇಕ ಪದರಗಳನ್ನು ಹೊಂದಿದೆ ಎಂದು ನಮಗೆ ಅರಿವು ಮೂಡಿಸಿದೆ. ಕೇವಲ ಮೂರು ತಲೆಮಾರುಗಳ ಹಿಂದೆ ಬಾಲ್ಯವಿವಾಹವು ಸಾಮಾನ್ಯ ಎನ್ನಿಸಿದ್ದ ಮತ್ತು ಇನ್ನೂ ವ್ಯಾಪಕವಾಗಿ ಪ್ರಚಲಿತದಲ್ಲಿರುವ ವಿಶ್ವದ ಅನೇಕ ಸಮಾಜಗಳಲ್ಲಿ ಒಂದಾಗಿ, ಸಂಸ್ಕೃತಿಯ ಶಕ್ತಿಯನ್ನು ನಿಭಾಯಿಸುವಾಗ ರಾಜ್ಯ ಮತ್ತು ಕಾನೂನು ಎದುರಿಸಬೇಕಾದ ಹೋರಾಟವನ್ನು ನಾವು ಗುರುತಿಸಬೇಕಾಗಿದೆ. ಯಾವುದೇ ಸಮಾನತೆಯಿಲ್ಲದಿರುವಲ್ಲಿ ಕಾನೂನು ನ್ಯಾಯವನ್ನು ಪಾಲಿಸುತ್ತದೆ. ಆದ್ದರಿಂದ ಹೆಣ್ಣು ಮಕ್ಕಳು ಹೆಚ್ಚಾಗಿ ಬಲಿಯಾಗುವ ಬಾಲಾಪರಾಧಗಳನ್ನು ಎದುರಿಸಲು ಸಾಧ್ಯವಾಗುವುದಿಲ್ಲ.

## ಬಾಲ್ಯಾವಧಿಯ ಲಿಂಗತ್ವ

ಲಿಂಗತ್ವ ವಿಭಿನ್ನತೆಯ ಅಧ್ಯಯನವು ಪರಿಚಿತ ಎಂದು ನಾವು ತಪ್ಪಾಗಿ ಭಾವಿಸುವ ಗಡಿಗೆ ನಮ್ಮನ್ನು ಕೊಂಡೊಯ್ಯುತ್ತದೆ. ಸ್ತ್ರೀವಾದಿ ಚಳುವಳಿ ಮತ್ತು ಸಿದ್ಧಾಂತವು ಬಾಲ್ಯದ ಬಗೆಗಿನ ಸಾಮಾನ್ಯ ಜ್ಞಾನ ಎಷ್ಟು ಅಪೂರ್ಣ ಮತ್ತು ಅಸಮತೋಲಿತವಾಗಿದೆ ಎಂಬುದನ್ನು ಸಾಕಷ್ಟು ತೋರಿಸಿಕೊಟ್ಟಿದೆ. ಅದೇ ಸಮಯದಲ್ಲಿ, ಈ ತೀವ್ರಗಾಮಿ ಬೆಳವಣಿಗೆಯು ಶಿಕ್ಷಣವು ಶೀಘ್ರದಲ್ಲೇ ಲಿಂಗ ಸಮತೋಲನವನ್ನು ಸರಿಹೊಂದಿಸುತ್ತದೆ ಎಂಬ ವಿಶ್ವಾಸವನ್ನು ಮೂಡಿಸಿದೆ. ಹೆಣ್ಣುಮಕ್ಕಳ ಬಾಲ್ಯವನ್ನು ಅಧ್ಯಯನ ಮಾಡುವ ನನ್ನ ಸ್ವಂತ ಪ್ರಯತ್ನವು ನಮ್ಮ ಆಶಾವಾದವು ಅಸಮರ್ಥನೀಯ ಎಂದು ಗುರುತಿಸಲು ಕಾರಣವಾಗಿದೆ. ನನ್ನ ಇತ್ತೀಚಿನ ಪುಸ್ತಕ "ಚೋರಿ ಬಜಾರ್ ಮೇ ಲರ್ಕಿ" ಯಲ್ಲಿ ಬಾಲಕಿಯರ ಬಾಲ್ಯದ ಮಾನಸಿಕ-ಸಂಕೇತಗಳ ವಿಶ್ಲೇಷಣೆಯನ್ನು ನಾನು ಪ್ರಸ್ತುತಪಡಿಸಿದ್ದೇನೆ. ಬಾಲ್ಯದ ಕಲ್ಪನೆ ಮತ್ತು ವ್ಯಕ್ತಿಚಿತ್ರಗಳಲ್ಲಿ ಸಾಮಾನ್ಯವಾಗಿ ನಲೆಗೊಂಡಿರುವ ಗಂಡುಮಕ್ಕಳ ಬಾಲ್ಯದ ಚಿತ್ರಣದಲ್ಲಿ ಹೆಣ್ಣು ಮಕ್ಕಳ ಚಿತ್ರಣವನ್ನು ಸೇರಿಸಲು ಪ್ರಯತ್ನಿಸಿದಾಗ ನಾವು ಎದುರಿಸುತ್ತಿರುವ ತೊಂದರೆಗಳನ್ನು ಇದು ತೋರಿಸುತ್ತದೆ.

ಮಕ್ಕಳ ಬೆಳವಣಿಗೆಯ ಕ್ಷೇತ್ರದಲ್ಲಿ ಪಡೆದ ಜ್ಞಾನವು ಐದು ಮತ್ತು 11 ವರ್ಷ ವಯಸ್ಸಿನ ಅಂದರೆ ಪ್ರಾಥಮಿಕ ಶಾಲಾ ವರ್ಷಗಳಲ್ಲಿ ದೈಹಿಕ ಮತ್ತು ಬೌದ್ಧಿಕ ಸಾಮರ್ಥ್ಯಗಳು ಬೆಳೆದಂತೆ ಮಗುವಿನ ಪರಿಧಿಯು ವಿಸ್ತಾರಗೊಳ್ಳುತ್ತದೆ ಎಂಬುದನ್ನು ಸೂಚಿಸುತ್ತದೆ. ಹುಡುಗಿಯರ ವಿಷಯದಲ್ಲಿ ಪ್ರೌಢಾವಸ್ಥೆಯು ಅದರ ಕಠಿಣತೆಯೊಂದಿಗೆ ಪ್ರಾರಂಭವಾಗುವುದಕ್ಕಿಂತ ಮುಂಚೆಯೇ ಈ

ವರ್ಷಗಳಲ್ಲಿ ಅವರ ದೈಹಿಕ ಒಡಾಟವನ್ನು ಮೊಟಕುಗೊಳಿಸುವಿಕೆಯು ಪ್ರಾರಂಭವಾಗುತ್ತದೆ. ದೇಹ ಕೇಂದ್ರಿತ ಪ್ರಜ್ಞೆ ಮತ್ತು ಬುದ್ಧಿಶಕ್ತಿಯ ಬಗೆಗಿನ ಜ್ಞಾನದ ಸಕ್ರಿಯ ನಿರಾಕರಣೆ ಕುಟುಂಬದಲ್ಲಿನ ಹೆಣ್ಣುಮಕ್ಕಳ ಸಾಮಾಜೀಕರಣದ ನಿರ್ಣಾಯಕ ಅಂಶಗಳಾಗಿವೆ. ಹೆಣ್ಣುಮಕ್ಕಳನ್ನು ಬಾಲ್ಯದಲ್ಲಿ ಮತ್ತು ಶಾಲಾ ಪ್ರಾರಂಭದಿಂದಲೂ ಶಿಕ್ಷಣದ ಗುರಿಗಳೊಂದಿಗೆ ರಕ್ಷಣೆಯಾಗುವ ರೀತಿಯಲ್ಲಿ ಬೆಳೆಸುವ  ಸಂಪ್ರದಾಯ ಮತ್ತು ಸಂಸ್ಕಾರಗಳು ಗಂಡುಮಕ್ಕಳನ್ನು ಬಾಲ್ಯದಲ್ಲಿ ಬೆಳೆಸುವ ರೀತಿಗೆ ಹೋಲುವುದಿಲ್ಲ.

ತನ್ನ ಸಮವಸ್ತ್ರದಲ್ಲಿ ಶಾಲೆಯ ಬಾಗಿಲುಗಳನ್ನು ಪ್ರವೇಶಿಸುವ ಹುಡುಗಿ ತನ್ನ ದೈನಂದಿನ ಅಸ್ತಿತ್ವದ ಎಲ್ಲಾ ಅಂಶಗಳನ್ನು ರೀತಿ ರಿವಾಜುಗಳು ಮತ್ತು ಆಚರಣೆಗೆ ಅನುಗುಣವಾಗಿ ಬದುಕಲು ಕಲಿಯುವ  ಹುಡುಗಿಯನ್ನು ಹಿಂದಿಟ್ಟಿರುತ್ತಾಳೆ  ಎಂದು ಆಲೋಚಿಸುವುದು ಕಲ್ಪನೆಯನ್ನು ನಮ್ಮ ವಿಶ್ಲೇಷಣೆಗೆ  ಮಾರ್ಗದರ್ಶನ ಮಾಡಲು ಆಹ್ವಾನಿಸಿದಂತೆ. ಬಾಲ್ಯವಿವಾಹದ ಸಂಖ್ಯೆಯು ಕಡಿಮೆಯಾಗಿದೆ, ಆದರೆ ಹುಡುಗಿಯ ಮನಸ್ಸನ್ನು ವೈವಾಹಿಕತೆ ಮತ್ತು ಮಾತೃತ್ವವನ್ನು ತನ್ನ ಅತ್ಯುನ್ನತ ಗುರಿಯನ್ನಾಗಿಟ್ಟುಕೊಳ್ಳುವಂತೆ ಸಿದ್ಧಪಡಿಸುವುದು ಸಾಮಾನ್ಯ  ಮತ್ತು ಅದು ದೈನಂದಿನ ವಿವೇಕವಾಗಿದೆ. ಇವು ಮತ್ತು ಲಿಂಗಭೇದದ ಹಲವಾರು ಇತರ ಅಂಶಗಳು ಬಾಲ್ಯದ ಬಗೆಗಿನ ನಮ್ಮ ಸಾಮಾನ್ಯ ಪರಿಕಲ್ಪನೆಯು ಹೆಣ್ಣು ಮಕ್ಕಳಿಗೆ ಹೊಂದಿಕೆಯಾಗುವುದಿಲ್ಲ ಎಂದು ಹೇಳಲು ಒಂದು ಬಲವಾದ ಪುರಾವೆಯನ್ನು ಒದಗಿಸುತ್ತವೆ.

## ಬಾಲ್ಯದ ಜಾತಿ

ಭಾರತದಲ್ಲಿ ಬಾಲ್ಯವನ್ನು ಅಧ್ಯಯನ ಮಾಡಲು ಭವಿಷ್ಯದಲ್ಲಿ ಸಂಪೂರ್ಣವಾಗಿ ಸಂಯೋಜಿಸಬೇಕಾದ ಮತ್ತೊಂದು ಚೌಕಟ್ಟನ್ನು ಜಾತಿ ಪ್ರಸ್ತುತಪಡಿಸುತ್ತದೆ. ಸಾಮಾಜಿಕ ಸಂಸ್ಥೆಯಾಗಿ ಅದರ ಶಕ್ತಿ ಮತ್ತು ಸ್ಥಿತಿಸ್ಥಾಪಕತ್ವವನ್ನು ಗುರುತಿಸುವುದನ್ನು ಇನ್ನು ಜಾತಿ ಅಧ್ಯಯನಕ್ಕೆ ಬಾಲ್ಯಾವಧಿಯ ಸಮಯದಲ್ಲಿ ಸಾಮಾಜೀಕರಣದ ಶಕ್ತಿಯುತ ಮೂಲವಾಗಿ ಅನ್ವಯಿಸಬೇಕಾಗಿಲ್ಲ. ಲೀಲಾ ಡೂಬ್ ಅವರ ಲಿಂಗ ವಿಶ್ಲೇಷಣೆಯು ಹೆಣ್ಣುಮಕ್ಕಳ ಬಾಲ್ಯದ ಆರಂಭಿಕ ಮತ್ತು ನಂತರದ ಭಾಗಗಳಲ್ಲಿ ಜಾತಿ-ನಿರ್ದಿಷ್ಟ ಪದ್ಧತಿಗಳು ಮತ್ತು ಆಚರಣೆಗಳು ವಹಿಸಬಹುದಾದ ಪಾತ್ರವನ್ನು ವಿವರಿಸುತ್ತವೆ. ಜಾತಿ ವ್ಯವಸ್ಥೆಯನ್ನು ಗಂಡುಮಕ್ಕಳು ಸಂಸ್ಕೃತೀಕರಣಗೊಳಿಸಿಕೊಳ್ಳುವ  ವಿಷಯದಲ್ಲಿ, ಕೆಲವು ಆತ್ಮಚರಿತ್ರೆಗಳಲ್ಲಿ ಮಾಹಿತಿ ಲಭ್ಯವಿದೆ. ಶಾಲೆಯು ಎದುರಿಸುತ್ತಿರುವ- ಅಥವಾ ದೂರಸರಿಸುತ್ತಿರುವ - ತಾರತಮ್ಯದ ಅಭ್ಯಾಸಗಳನ್ನು ನ್ಯಾಯ ಸಮ್ಮತಗೊಳಿಸುತ್ತಿರುವ ಜಾತಿ ವ್ಯವಸ್ಥೆಯನ್ನು ವಿಶಾಲ ವ್ಯಾಪ್ತಿಯಲ್ಲಿ ಅರ್ಥಮಾಡಿಕೊಳ್ಳಲು ಓಂ ಪ್ರಕಾಶ್

ವಾಲ್ಮೀಕಿಯಂತಹ ದಲಿತ ಲೇಖಕರು ಬರೆದ ಆತ್ಮಚರಿತ್ರೆಗಳು ಅಮೂಲ್ಯ ಆಕರಗಳಾಗಿವೆ.

ಒಬ್ಬ ವಿದ್ಯಾವಂತ ವ್ಯಕ್ತಿಯು ಜಾತಿ ಪ್ರಜ್ಞೆಯನ್ನು ಕಡಿಮೆ ಹೊಂದಿರುತ್ತಾನೆಂದು ಅಂದುಕೊಳ್ಳುವುದು ಶಿಕ್ಷಣವು ಆಧುನಿಕತೆಯ ಮೂಲ ಎನ್ನುವುದು ಉತ್ತೇಕ್ಷೆಯಾಗುತ್ತದೆ. ನಗರೀಕರಣದ ಪಾತ್ರದ ಬಗ್ಗೆಯೂ ಇದನ್ನೇ ಹೇಳಬಹುದು. ಬಾಲ್ಯದಲ್ಲಿ ಸಾಮಾಜೀಕರಣದ ಪ್ರಮುಖ ಮೂಲವಾಗಿ ಜಾತಿಯ ಪಾತ್ರವನ್ನು ಸಂಪೂರ್ಣವಾಗಿ ಗ್ರಹಿಸಬೇಕಾದರೆ ಅಂತಹ ಎರಡೂ ಹೇಳಿಕೆಗಳನ್ನೂ ಪ್ರಶ್ನಿಸಬೇಕಾಗಿದೆ. ಭಾರತದಲ್ಲಿ ಬಾಲ್ಯವು ಸಾಮಾಜಿಕ ಕೇಂದ್ರವಾಗಿ ದೀರ್ಘಾವಧಿಯಲ್ಲಿ ವಿಕಸನಗೊಳ್ಳಲು ಇಂತಹ ಕ್ರಮ ಅಗತ್ಯ.

## ನಿರ್ಭಯ ನವ ವಿಶ್ವ?

ಬಾಲ್ಯವು ಸಾಮಾಜಿಕ ವರ್ಗವಾಗಿ ರೂಪುಗೊಳ್ಳುವ ಮೊದಲು, ರಾಜಕೀಯ ಮಾನ್ಯತೆಯೊಂದಿಗೆ ಹೊಸ ಅಪರಿಚಿತ ಜಗತ್ತು ನಮ್ಮ ಆವರಿಸಿದೆ. ಇದು ಹೊಸ ಮಾಹಿತಿ ಮತ್ತು ಸಮುದಾಯ ತಂತ್ರಜ್ಞಾನದ ಜಗತ್ತು. ಬಾಲ್ಯವನ್ನು ರಕ್ಷಿಸಲು ಯುರೋಪ್ ಪ್ರಯತ್ನಿಸಿದ ಪರಿಧಿಯನ್ನು ಅದು ಭೇಧಿಸಿದೆ. ಈ ಪ್ರಸಂಗವನ್ನು ಎಚ್ಚರಿಕೆಯಿಂದ ಪರೀಕ್ಷಿಸುವ ಅಗತ್ಯವಿದೆ. ಏಕೆಂದರೆ ಅದು ತುಂಬಾ ಹೊಸದು ಮತ್ತು ಇದು ಯಾವುದೇ ನಿರ್ದಿಷ್ಟ ನಿರ್ಬಂಧನೆಗಳಿಲ್ಲದ (ಫುಟ್ ಲೂಸ್ ಕ್ಯಾಪಿಟಲ್) ನ ರಾಜಕೀಯ ಆರ್ಥಿಕತೆಯಲ್ಲಿ ದೃಢವಾಗಿ ಹೆಣೆದುಕೊಂಡಿದೆ. ಮಾನವ ಜೀವಿಗಳು ಹೇಗೆ ಪರಸ್ಪರ ಸಂವಹನ ನಡೆಸುತ್ತಾರೆ ಮತ್ತು ಹೇಗೆ ಸಂಬಂಧ ಹೊಂದಿದ್ದಾರೆ ಎಂಬುದರ ಮೇಲೆ ಅದರ ಪ್ರಭಾವವನ್ನು ಅನುಭವಿಸಲಾಗುತ್ತಿದೆ. ಆದರೆ ಅದರ ಸ್ವರೂಪ ಮತ್ತು ಪ್ರಭಾವ ನಮಗೆ ಸಂಪೂರ್ಣವಾಗಿ ತಿಳಿದಿಲ್ಲ. ಈ ಪರಿಣಾಮವು ವಯಸ್ಕರು ಮತ್ತು ಮಕ್ಕಳ ಸಂಬಂಧಗಳನ್ನು ಹೇಗೆ ರೂಪಿಸುತ್ತದೆ ಎಂಬುದೂ ಅಸ್ಪಷ್ಟವಾದ ಕ್ಷೇತ್ರ.

ಹೊಸ ತಾಂತ್ರಿಕ ಪರಿಸರವು ರಾಷ್ಟ್ರ, ರಾಜ್ಯಗಳು, ಪ್ರದೇಶಗಳು, ಸಂಸ್ಕೃತಿಗಳು ಮತ್ತು ವಯಸ್ಸಿನ ನಡುವಿನ ಗಡಿಗಳನ್ನು ಮಸುಕುಗೊಳಿಸುತ್ತದೆ. ಮಕ್ಕಳು ಈಗ ನೇರವಾಗಿ ಗ್ರಾಹಕ-ನಾಗರಿಕರ ಜಾಗತಿಕ ಸಮುದಾಯಕ್ಕೆ ಪ್ರವೇಶಿಸಬಹುದು ಮತ್ತು ಸೇರಿಕೊಳ್ಳಬಹುದು. ಮಕ್ಕಳೊಂದಿಗೆ ವಿಡಿಯೋ ಆಟಗಳು, ಆಟಿಕೆಗಳು ಮತ್ತು ಸಾಮಾಜಿಕ ಮಾಧ್ಯಮ ಜಾಲ ತಾಣಗಳನ್ನು ವಿನ್ಯಾಸಗೊಳಿಸುವ ಜಾಗತಿಕ ಸಂಘಸಂಸ್ಥೆಗಳಿಂದ ನಿರ್ವಹಿಸಲ್ಪಡುವ ಈ ಹೊಸ ಸಮುದಾಯವು ಆಟ ಸೇರಿದಂತೆ ಬಾಲ್ಯಾವಧಿಯ ಎಲ್ಲಾ ಅಂಶಗಳನ್ನು ಒಳಗೊಂಡಿದೆ. ಮಗುವಿನ ಸಮೀಪದಲ್ಲಿ ವಾಸಿಸುವ ಹಿರಿಯರು ಅವನ ಅಥವಾ ಅವಳ ಸಾಮಾಜೀಕರಣಕ್ಕೆ ಜವಾಬ್ದಾರರಾಗಿರುವ ಏಕೈಕ ಅಥವಾ ಪ್ರಾಥಮಿಕ ಮಧ್ಯವರ್ತಿಗಳಲ್ಲ. ಪೋಷಕರು ಇನ್ನು ಮುಂದೆ ರಕ್ಷಕರ ಪಾತ್ರವನ್ನು

ನಿರ್ವಹಿಸಲು ಸಾಧ್ಯವಿಲ್ಲ, ಅಥವಾ ಮಗುವಿನ ಜ್ಞಾನದ ವಿಸ್ತಾರವನ್ನು ಸೃಷ್ಟಿಸಲು ಸಾಧ್ಯವಿಲ್ಲ. ಸಹವರ್ತಿಗಳಂತೆ, ಶಿಕ್ಷಕರೂ ಸಹ ಹೊಸ ಕ್ರಮದಲ್ಲಿ ಕಡಿಮ ಜ್ಞಾನವನ್ನು ಹೊಂದಿದಾರೆ. ತಾಂತ್ರಿಕ-ಅದ್ಭುತಗಳ ದೃಷ್ಟಿಯಲ್ಲಿ, ಇದು ವಯಸ್ಕರ ನಿಯಂತ್ರಣ ಮತ್ತು ಮೇಲ್ವಿಚಾರಣೆಯಿಂದ ಮಗುವಿನ ವಿಮೋಚನೆಯ ಕ್ಷಣವಾಗಿದೆ. ಮಕ್ಕಳು ಪೌರರಾಗಿ ತಯಾರಾಗುವ ಹಂತದಲ್ಲಿಲ್ಲ ಬದಲಾಗಿ ರಾಷ್ಟ್ರದ ಕಾನೂನು ಪೌರತ್ವವನ್ನು ಪಡೆಯಲು ಬಹಳ ಹಿಂದೆಯೇ ಜಾಗತಿಕ ಮಾರುಕಟ್ಟೆಯ ಸಕ್ರಿಯ ಸದಸ್ಯತ್ವಕ್ಕಾಗಿ ಅವರನ್ನು ಸಜ್ಜುಗೊಳಿಸಲು ರಾಜ್ಯವು ಉದ್ದೇಶಿಸಿದೆ. ಹೆಣ್ಣುಮಕ್ಕಳ ವಿಷಯ, ಮತ್ತೊಮ್ಮೆ ಸ್ವಲ್ಪ ವಿಭಿನ್ನವಾಗಿದೆ. ಜಾಗತಿಕ ಮಾರುಕಟ್ಟೆಯಲ್ಲಿ, ಅವರು ವಿಶೇಷ ಆಸಕ್ತಿಯ ವಿಷಯ ಏಕೆಂದರೆ ಅವರ ಶಕ್ತಿ ಮತ್ತು ಬಳಕೆಯ ವಿಧಾನಗಳು ತಮ್ಮ ಸ್ವಂತ ಮೌಲ್ಯದೊಂದಿಗೆ ಅವರೂ ಬಳಕೆಯ ವಸ್ತುಗಳಾಗಿರುವುದರೊಡನೆ ಬಲವಾದ ಸಂಬಂಧ ಹೊಂದಿದೆ.

ಮಕ್ಕಳ ಹೊಸ ಭೌಗೋಳಿಕ ಪರಿಧಿಯೊಂದಿಗಿನ ಚಲನವಲನಗಳು ರಕ್ಷಣೆಯ ಹಳೆಯ ರೀತಿನೀತಿಗಳನ್ನು ಮತ್ತು ಮಾರ್ಗದರ್ಶನವನ್ನು ಅರ್ಥಹೀನವಾಗಿಸುತ್ತವೆ. ಮಗು ಮಿತಿಯಿಲ್ಲದ ಜಗತ್ತಿನಲ್ಲಿ ಮತ್ತೆ ದುರ್ಬಲವಾಗಿದೆ. ಇದು ಮಗುವಿನ ದೈಹಿಕ ಸ್ವಾಸ್ಥ್ಯ ಮತ್ತು ಬೌದ್ಧಿಕ ಮತ್ತು ಭಾವನಾತ್ಮಕ ಬೆಳವಣಿಗೆಗೆ ಏನು ಸೂಚಿಸುತ್ತದೆ ಎಂಬುದನ್ನು ಆಲೋಚಿಸಬೇಕಾಗಿದೆ. ಈ ಆಲೋಚನೆಗಾಗಿ, ಇಲ್ಲಿಯವರೆಗೆ ಲಭ್ಯವಿರುವ ಸಿದ್ಧಾಂತಗಳಿಂದ ನಮಗೆ ಹೆಚ್ಚಿನ ಮಾರ್ಗದರ್ಶನ ದೊರಕುವುದಿಲ್ಲ.

***